# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಮೇ ೨೨, ೨೦೧೪ (ಜ್ಯೇಷ್ಠ ೧, ಶಕ ವರ್ಷ ೧೯೩೬)<br>Bangalore, Thursday, May 22, 2014 (Jyeishta 1, Shaka Varsha 1936) | ಸಂಚಿಕೆ ೨೧<br>Issue 21 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**4ನೇ ಸಂಚಾರ ನ್ಯಾಯಾಲಯದ ನ್ಯಾಯಾಧೀಶರ ಘನ ಸನ್ನಿಧಾನಕ್ಕೆ ಬೆಂಗಳೂರು ನಗರ.**

**ವಿಷಯ:** ವಾರಸುದಾರರಿಲ್ಲದೇ ಜಯನಗರ ಸಂಚಾರಿ ಪೊಲೀಸ್ ಠಾಣೆಯಲ್ಲಿ ವಶಪಡಿಸಿಕೊಂಡಿರುವ ವಾಹನಗಳ ವಿವರಗಳು

| Sl. No | C'mise No | P.F.No | TYPE OF VEHICLE | REG NO. | ENGINE NUMBER | CHASSIS NUMBER |
|---|---|---|---|---|---|---|
| 1. | 01/14 | 02/14 | TVS Victor | KA14U1743 | 0F1E51411886 | MD625AF552E36687 |
| 2. | 01/14 | 02/14 | Kinetic Honda | KA05EE8838 | K01AM517284 | K01AF524607 |
| 3. | 01/14 | 02/14 | Kinetic Honda | KA01H5000 | 796124UE-PF | |
| 4. | 01/14 | 02/14 | Bajaj Chetak | KA07E5553 | 06E93D39506 | 06C93D41432 |
| 5. | 01/14 | 02/14 | Bajaj Pulsor | KA02EN129 | DHGBLC25840 | |
| 6. | 01/14 | 02/14 | Bajaj Pulsor | KA51Q1606 | DJHBPF37462 | MD2DHDHZZPCF98569 |
| 7. | 01/14 | 02/14 | Yamaha | CHE6949 | 30E110444 | 306038312 |
| 8. | 01/14 | 02/14 | Suzuki Samurai | KA03Q4930 | G507M576735 | 8507F533348 |
| 9. | 01/14 | 02/14 | Suzuki Samurai | CAV4495 | 3509M025461 | 3509F018142 |
| 10. | 01/14 | 02/14 | Kinetic Honda | KA016242 | 895863WEQJ | HE0J980B468 |
| 11. | 01/14 | 02/14 | Bajaj Chetak | KA03L386 | 06M94D31964 | 06F94D49456 |

**PR.218**

**SC.50**

ಮಹಾನಗರ ದಂಡಾಧಿಕಾರಿ IV ಸಂಚಾರ
ನ್ಯಾಯಾಲಯ ಬೆಂಗಳೂರು

## ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು

### ಅಧಿಸೂಚನೆ

ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತದ (ಇದರಲ್ಲಿ ಇನ್ನು ಮುಂದೆ ಡಾ.ಬಿ.ಆರ್.ಅಂ.ಅ.ನಿ. ಎಂದು ಕರೆಯಲಾಗಿದೆ) ಸಂಸ್ಥಾಪನಾ ಪತ್ರದ ಮೂಲಕ ತನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ನಿಗಮದ ನಿರ್ದೇಶಕರ ಮಂಡಳಿಯು ಕರ್ನಾಟಕ ಸರ್ಕಾರದ ಅನುಮೋದನೆ ಪಡೆದು ಈ ಮುಂದಿನ ವಿನಿಯಮಗಳನ್ನು ರಚಿಸುತ್ತದೆ, ಎಂದರೆ:

### ನಿಯಮಗಳು

1. **ಹೆಸರು ಮತ್ತು ಪ್ರಾರಂಭ:** (1) ಈ ನಿಯಮಗಳನ್ನು ಡಾ.ಬಿ.ಆರ್.ಅಂ.ಅ.ನಿ.ದ (ವೃಂದ ಮತ್ತು ನೇಮಕಾತಿ) ನಿಯಮಗಳು 2013 ಎಂದು ಕರೆಯಬಹುದು
   (2) ನಿಗಮದ ನಿರ್ದೇಶಕರ ಮಂಡಳಿಯು ಅಧಿಸೂಚಿಸಿದ ದಿನಾಂಕದಿಂದ ಅವುಗಳು ಜಾರಿಗೆ ಬರತಕ್ಕದ್ದು.

2. **ಪರಿಭಾಷೆಗಳು:** (1) ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು:–

ಎ) "ನೇಮಕಾತಿ ಪ್ರಾಧಿಕಾರ" ಎಂದರೆ ಡಾ.ಬಿ.ಆರ್.ಅಂ.ಅ.ನಿ.ದ **ವ್ಯವಸ್ಥಾಪಕ ನಿರ್ದೇಶಕರು;**

ಬಿ) "ನೇರ ನೇಮಕಾತಿ": ಯಾವುದೇ ಪ್ರವರ್ಗದ ಸೇವೆ ಅಥವಾ ಹುದ್ದೆಗೆ ಸಂಬಂಧಿಸಿದಂತೆ ನೇರ ನೇಮಕಾತಿಯಲ್ಲಿ ಯಾವುದೇ ರಾಜ್ಯ ಸಿವಿಲ್ ಸೇವೆ ಅಥವಾ ನಿಗಮ ಅಥವಾ ಸಂಸ್ಥೆಯಿಂದ ಬಡ್ತಿ ಅಥವಾ ಪ್ರತಿನಿಯೋಜನೆ ಮೂಲಕ ಮಾಡಿಕೊಳ್ಳುವ ನೇಮಕಾತಿಗಿಂತ ಬೇರೆಯದಾದ ನೇಮಕಾತಿಯು ಒಳಗೊಳ್ಳುತ್ತದೆ;

ಸಿ) "ನೌಕರ" ಎಂದರೆ ಈ ನಿಯಮಗಳ ಅನುಸಾರ ನೇಮಕಗೊಂಡ ನಿಗಮದ ನೌಕರ;

ಡಿ) "ನಿರ್ದೇಶಕರ ಮಂಡಳಿ" ಎಂದರೆ ನಿಗಮದ ಸಂಸ್ಥಾಪನಾ ಪತ್ರದಂತೆ ರಚಿತವಾದ ನಿಗಮದ ನಿರ್ದೇಶಕರ ಮಂಡಳಿ;

ಇ) "ಅಧಿಕಾರಿ" ಎಂದರೆ ನಿಗಮದ ಅಧಿಕಾರಿ;

ಎಫ್) "ಹಿಂದುಳಿದ ವರ್ಗಗಳು" ಎಂದರೆ ಕರ್ನಾಟಕ ಸರ್ಕಾರವು ಹಿಂದುಳಿದ ವರ್ಗಗಳೆಂದು ಹಾಗೆ ಅಧಿಸೂಚಿಸಿದ ವರ್ಗ ಮತ್ತು ಪ್ರವರ್ಗಗಳಿಗೆ ಸೇರಿದ ವ್ಯಕ್ತಿಗಳು;

ಜಿ) "ಬಡ್ತಿ" ಎಂದರೆ ನಿಗಮದ ಸೇವೆಯ ಕೆಳ ಹುದ್ದೆ ಅಥವಾ ಶ್ರೇಣಿಯಿಂದ ಸೇವೆಯ ಉನ್ನತ ಹುದ್ದೆ ಅಥವಾ ಶ್ರೇಣಿಗೆ ನೇಮಕ;

ಎಚ್) "ನೇಮಕಾತಿ ಸಮಿತಿ" ಎಂದರೆ ನೇರ ನೇಮಕಾತಿಯನ್ನು ಮಾಡುವ ಉದ್ದೇಶಕ್ಕಾಗಿ ಈ ನಿಯಮಗಳಲ್ಲಿ ನಿಯಮಿಸಲ್ಪಟ್ಟಂತೆ ನಿರ್ದೇಶಕರ ಮಂಡಳಿಯಿಂದ ನೇಮಕವಾದ ಪ್ರಾಧಿಕಾರ;

ಐ) "ಅನುಸೂಚಿತ ಜಾತಿಗಳು" ಮತ್ತು "ಅನುಸೂಚಿತ ಬುಡಕಟ್ಟುಗಳು" ಭಾರತ ಸಂವಿಧಾನದ 341 ಮತ್ತು 342ನೇ ಅನುಚ್ಛೇದಗಳ ಮೇರೆಗೆ ಮಾಡಿದ ಸಂವಿಧಾನದ (ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಬುಡಕಟ್ಟುಗಳ) ಆದೇಶ 1950ರಲ್ಲಿ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳಿಗೆ ಸಂಬಂಧಿಸಿದ ಉಲ್ಲೇಖಕ್ಕೆ ಅನುರೂಪವಾಗಿರತಕ್ಕದ್ದು;

ಜೆ) "ಆಯ್ಕೆ" ಎಂದರೆ ನೇಮಕಾತಿ ಸಮಿತಿಯಿಂದ ಈ ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ಮಾಡಲಾದ ಆಯ್ಕೆ;

ಕೆ) "ನಿಗಮ" ಎಂದರೆ ಕಂಪನಿಗಳ ಅಧಿನಿಯಮ 1956 ಮೇರೆಗೆ ನೊಂದಾಯಿತವಾದ ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ;

(2) ಈ ನಿಯಮಗಳಲ್ಲಿ ಬಳಸಿದ ಆದರೆ ಪರಿಭಾಷಿಸಿರದ ಪದಗಳು, ಕಂಪನಿಗಳ ಅಧಿನಿಯಮ 1956ರಲ್ಲಿ ಅಥವಾ ಸಂದರ್ಭಾನುಸಾರ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14) ರ ಮೇರೆಗೆ ರಚಿಸಿದ ಅಥವಾ ರಚಿಸಲಾಗಿದೆಯೆಂದು ಭಾವಿಸಿದ ನಿಯಮಗಳಲ್ಲಿ ಅವುಗಳಿಗೆ ನೀಡಿರುವ ಅರ್ಥಗಳನ್ನೇ ಹೊಂದಿರತಕ್ಕದ್ದು.

3. **ಡಾ.ಬಿ.ಆರ್.ಅಂ.ಅ. ನಿಗಮದ ನೌಕರರಿಗೆ ಅನ್ವಯವಾಗುವ ಇತರೆ ನಿಯಮಗಳು:–** ಈ ನಿಯಮಗಳಲ್ಲಿ ಅನ್ಯಥಾ ಉಪಬಂಧಿಸಲಾದದ್ದನ್ನುಳಿದು, ಸರ್ಕಾರಿ ನೌಕರಿಗಾಗಿ ಕರ್ನಾಟಕ ಸರ್ಕಾರವು ನಿಯಮಿಸಿದಂಥ ಇತರ ನಿಯಮಗಳ ಉಪಬಂಧಗಳನ್ನು ಡಾ:ಬಿ.ಆರ್.ಅಂಅ.ಅ. ನಿಗಮದ ನೌಕರರಿಗೂ ಮಂಡಳಿಯ ಅನುಮತಿಯನ್ನು ಪಡೆದು ಅಗತ್ಯವಾದಂತೆ ಅಳವಡಿಸಿಕೊಳ್ಳಬಹುದು.

4. **ಹುದ್ದೆಯ ಪ್ರವರ್ಗ, ನೇಮಕಾತಿ ವಿಧಾನ ಮತ್ತು ಕನಿಷ್ಠ ವಿದ್ಯಾರ್ಹತೆ:–** ಡಾ.ಬಿ.ಆರ್.ಅಂ.ಅ. ನಿಗಮದ ಸಿಬ್ಬಂದಿ ವರ್ಗವು ಹುದ್ದೆಗಳ ಪ್ರವರ್ಗವನ್ನು ಒಳಗೊಂಡಿದ್ದು ವೇತನ ಶ್ರೇಣಿ, ನೇಮಕಾತಿ ವಿಧಾನ ಮತ್ತು ಕನಿಷ್ಠ ವಿದ್ಯಾರ್ಹತೆಯು ಅನುಸೂಚಿ–I ಮತ್ತು II ಹಾಗೂ VI ರಲ್ಲಿ ನಿರ್ಧಿಷ್ಟಪಡಿಸಿದಂತೆ ಇರತಕ್ಕದ್ದು.

5. **ಡಾ.ಬಿ.ಆರ್.ಅಂ.ಅ. ನಿಗಮದ ನೌಕರರು ಕೆಲವು ಇಲಾಖಾ ಪರೀಕ್ಷೆಗಳನ್ನು ತೇರ್ಗಡೆ ಮಾಡಬೇಕಾಗಿರುತ್ತದೆ:–**

(1) ನೌಕರರು ಈ ನಿಯಮಗಳ ಮೇರೆಗೆ ಉಪಬಂಧಿಸಲಾದಂತೆ ಪ್ರೊಬೇಷನರಿ ಅವಧಿಯೊಳಗೆ ಕನ್ನಡ ಭಾಷಾ ಪರೀಕ್ಷೆಯಲ್ಲಿ ಮತ್ತು ಕೆಲವು ಇತರ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು.
(2) ನೌಕರನು ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದಾಗ ಮಾತ್ರವೇ ಅವನು ಹೊಂದಿದ ಹುದ್ದೆಯಲ್ಲಿ ಖಾಯಂಗೊಳ್ಳತಕ್ಕದ್ದು ಅಥವಾ ಕಾಲಿಕ ವೇತನ ಶ್ರೇಣಿಯ ವೇತನ ಬಡ್ತಿ ಪಡೆಯತಕ್ಕದ್ದು.

(3) ಯಾವುದೇ ಉನ್ನತ ಹುದ್ದೆಯ ಬಡ್ತಿಗಾಗಿ, ಅಭ್ಯರ್ಥಿಯು, ಈ ನಿಯಮಗಳ ಮೇರೆಗೆ ಉಪಬಂಧಿಸಲಾದಂತೆ ಅಂಥ ಉನ್ನತ ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರಬೇಕು.

6. **ಶಿಸ್ತು ವ್ಯವಹರಣೆಗಳನ್ನು ಹೂಡುವ ಮತ್ತು ದಂಡನೆಗಳನ್ನು ವಿಧಿಸುವ ಪ್ರಾಧಿಕಾರ ಮತ್ತು ಅಪೀಲು ಉಪಬಂಧಗಳು:–** ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತದ ಯಾರೇ ನೌಕರನ ವಿರುದ್ಧ ಶಿಸ್ತು ವ್ಯವಹರಣೆಗಳನ್ನು ನೇಮಕ ಪ್ರಾಧಿಕಾರವು ಕರ್ನಾಟಕ ಸಿವಿಲ್ ಸೇವೆಗಳ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ಕ್ಕೆ ಅನುಸಾರವಾಗಿ ಹೂಡಬಹುದು. ನೇಮಕಾತಿ ಪ್ರಾಧಿಕಾರ, ವಿವಿಧ ಬಗೆಯ ದಂಡನೆಗಳನ್ನು ವಿಧಿಸುವ ಶಿಸ್ತು ಪ್ರಾಧಿಕಾರ ಮತ್ತು ಅಪೀಲು ಪ್ರಾಧಿಕಾರಗಳು ಈ ನಿಯಮಗಳಿಗೆ ಸೇರ್ಪಡೆ ಮಾಡಲಾದ III ನೇ, IV ನೇ ಮತ್ತು Vನೇ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದಂತೆ ಇರತಕ್ಕದ್ದು.

7. **ನಿವೃತ್ತಿ ಪ್ರಯೋಜನಗಳು:–** ನಿಗಮದ ನೌಕರರು ನಿವೃತ್ತಿಯ ನಂತರ ಈ ಮುಂದಿನ ಪ್ರಯೋಜನಗಳನ್ನು ಪಡೆಯಲು ಅರ್ಹರಾಗಿರುತ್ತಾರೆ.

ಎ. ಸಮೂಹ ಉಪದಾನ

ಬಿ. ಗುಂಪು ವಿಮೆ

ಸಿ. ನೌಕರರ ಭವಿಷ್ಯ ನಿಧಿ

ಡಿ. ಗಳಿಕೆ ರಜೆ ನಗದೀಕರಣ

ಈ ವಿನಿಯಮಗಳಲ್ಲಿ ಒಳಗೊಂಡಿರುವುದು ಏನೇ ಇದ್ದರೂ, ಡಾ.ಬಿ.ಆರ್.ಅಂ.ಅ.ನಿ. ನಿಯಮಿತದ ಯಾರೇ ನೌಕರನು ನಿವೃತ್ತಿ ವೇತನಕ್ಕೆ ಅರ್ಹನಾಗಿರತಕ್ಕದ್ದಲ್ಲ.

**ಅನುಸೂಚಿ–I**

**ಹುದ್ದೆಗಳ ಪ್ರವರ್ಗ, ವೇತನ ಶ್ರೇಣಿ ಮತ್ತು ಹುದ್ದೆಗಳ ಸಂಖ್ಯೆಗಳನ್ನು ತೋರಿಸುವ ವಿವರಣ ಪಟ್ಟಿ**

**ಸಾರ್ವಜನಿಕ ವಲಯದ ಉದ್ಯಮ : ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ**

| ಕ್ರ. ಸಂ. | ಹುದ್ದೆಗಳ ಪ್ರವರ್ಗ | ವೇತನ ಶ್ರೇಣಿ (ರೂ.) | ಹುದ್ದೆಗಳ ಸಂಖ್ಯೆ | ಷರಾ |
|---|---|---|---|---|
| 1 | ವ್ಯವಸ್ಥಾಪಕ ನಿರ್ದೇಶಕರು | | 1 | |
| 2 | ಪ್ರಧಾನ ವ್ಯವಸ್ಥಾಪಕರು | 40050–56550 | 4 | |
| 3 | ಉಪ ಪ್ರಧಾನ ವ್ಯವಸ್ಥಾಪಕರು | 36300–53850 | 4 | |
| 4 | ಕಂಪನಿ ಕಾರ್ಯದರ್ಶಿ | 36300–53850 | 1 | |
| 5 | ಕಾರ್ಯಪಾಲಕ ಅಭಿಯಂತರರು | 36300–53850 | 1 | |
| 6 | ಹಿರಿಯ ಕಂಪ್ಯೂಟರ್ ಪ್ರೋಗ್ರಾಮರ್ | 30400–51300 | 1 | |
| 7 | ಜಿಲ್ಲಾ ವ್ಯವಸ್ಥಾಪಕರು | 28100–50100 | 21 | |
| 8 | ಸಹಾಯಕ ಕಾರ್ಯಪಾಲಕ ಅಭಿಯಂತರರು | 28100–50100 | 1 | |
| 9 | ಡ್ರಿಲ್ಲಿಂಗ್ ಅಭಿಯಂತರರು | 24000–45300 | 1 | |
| 10 | ಸಹಾಯಕ ಜಿಲ್ಲಾ ವ್ಯವಸ್ಥಾಪಕರು (ವಸೂಲಾತಿ)– "ಎ" ದರ್ಜೆ | 24000–45300 | 19 | |
| 11 | ಸಹಾಯಕ ಅಭಿಯಂತರರು | 22800–43200 | 3 | |
| 12 | ತಾಲ್ಲೂಕು ಅಭಿವೃದ್ಧಿ ಅಧಿಕಾರಿ– "ಬಿ" ದರ್ಜೆ | 22800–43200 | 117 | |
| 13 | ಆಂತರಿಕ ಲೆಕ್ಕಪರಿಶೋಧಕ | 21600–40050 | 1 | |
| 14 | ಕಛೇರಿ ಅಧೀಕ್ಷಕರು | 20000–36300 | 30 | |
| 15 | ಲೆಕ್ಕ ಸಹಾಯಕರು | 14550–26700 | 24 | |
| 16 | ಶೀಘ್ರಲಿಪಿಗಾರರು | 14550–26700 | 3 | |

| ಕ್ರ. ಸಂ. | ಹುದ್ದೆಗಳ ಪ್ರವರ್ಗ | ವೇತನ ಶ್ರೇಣಿ (ರೂ.) | ಹುದ್ದೆಗಳ ಸಂಖ್ಯೆ | ಷರಾ |
|---|---|---|---|---|
| 17 | ಪ್ರಥಮ ದರ್ಜೆ ಸಹಾಯಕರು | 14550–26700 | 30 | |
| 18 | ದ್ವಿತಿಯ ದರ್ಜೆ ಸಹಾಯಕರು – ಹಾಗೂ – ಕಂಪ್ಯೂಟರ್ ಆಪರೇಟರ್ | 11600–21000 | 49 | |
| 19 | ಕಂಪ್ಯೂಟರ್ ಆಪರೇಟರ್ – ಹಾಗೂ – ಬೆರಳಚ್ಚುಗಾರರು | 11600–2100 | 16 | |
| 20 | ಹಿರಿಯ ವಾಹನ ಚಾಲಕರು | 14550–26700 | 5 | ಮಂಡಳಿಯ ಅನುಮೋದನೆ ಪಡೆದು ಮೇಲ್ದರ್ಜೆಗೇರಿಸಲಾಗಿದೆ. |
| 21 | ವಾಹನ ಚಾಲಕರು | 11600–21000 | 17 | |
| 22 | ದಲಾಯತರು | 9600–14550 | 32 | |
| | ಒಟ್ಟು | | 381 | |

**ಅನುಸೂಚಿ–II**

**ವಿವರಣಾ ಪಟ್ಟಿ –1ಕ್ಕೆ ಅನುಸಾರವಾಗಿ ಹುದ್ದೆಗಳ ನೇಮಕಾತಿ/ಬಡ್ತಿ/ಮರು–ಪದನಾಮೀಕರಣದ ವಿಧಾನವನ್ನು ತೋರಿಸುವ ವಿವರಣಾ ಪಟ್ಟಿ**

**ಸಾರ್ವಜನಿಕ ವಲಯದ ಉದ್ಯಮ : ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ**

| ಕ್ರ. ಸಂ. | ಹುದ್ದೆಗಳ ಪ್ರವರ್ಗ | ವೃಂದದ ಸಂಖ್ಯಾಬಲ | ಪರಿಷ್ಕೃತ ವೇತನ ಶ್ರೇಣಿ | ನೇಮಕಾತಿ ವಿಧಾನ | ಅರ್ಹತೆ | | |
|---|---|---|---|---|---|---|---|
| | | | | | ನೇರ ನೇಮಕಾತಿಗಾಗಿ | ಬಡ್ತಿಗಾಗಿ | |
| 1 | ವ್ಯವಸ್ಥಾಪಕ ನಿರ್ದೇಶಕರು | 1 | ಪ್ರತಿ ನಿಯೋಜಿತ ಅಧಿಕಾರಿಗೆ ಅನ್ವಯಿಸುವ ವೇತನ ಶ್ರೇಣಿ | ಭಾ.ಆ.ಸೇ/ಭಾ.ಪೋ.ಸೇ./ ಭಾ.ಅ.ಸೇ./(ಆಯ್ಕೆ ಶ್ರೇಣಿ) ಮತ್ತು ಕ.ಆ.ಸೇ(ಆಯ್ಕೆ ಶ್ರೇಣಿ) ಗಳಿಂದ ಪ್ರತಿ ನಿಯೋಜನೆ ಮೂಲಕ | – | – | – |
| 2<br>2.1 | ಪ್ರಧಾನ ವ್ಯವಸ್ಥಾಪಕರು (ಸಿ ಮತ್ತು ಅ) | 1 | ಕ.ಆ.ಸೇ.ಯ ಹಿರಿಯ ಶ್ರೇಣಿಗೆ ಅನ್ವಯವಾಗುವ ವೇತನ ಶ್ರೇಣಿ (ರೂ.40050–56550) | ಉಪ ಪ್ರಧಾನ ವ್ಯವಸ್ಥಾಪಕರ ವೃಂದದಿಂದ ಬಡ್ತಿ ಮೂಲಕ ಅಥವಾ ನಿಗಮದಲ್ಲಿ ಬಡ್ತಿಗಾಗಿ ಅರ್ಹ ಅಧಿಕಾರಿಗಳು ಇಲ್ಲದಿದ್ದಾಗ ಸರ್ಕಾರದ ಮೂಲಕ ಪ್ರತಿ ನಿಯೋಜನೆ | | 1. ಉಪ ಪ್ರಧಾನ ವ್ಯವಸ್ಥಾಪಕರಾಗಿ 5 ವರ್ಷ ಸೇವೆ ಸಲ್ಲಿಸಿರಬೇಕು.<br>2. ನಿಯಮಿಸಿದ ಇಲಾಖಾ ಪರೀಕ್ಷೆಗಳನ್ನು ತೇರ್ಗಡೆಯಾಗಿರಬೇಕು.<br>3. ಜೇಷ್ಠತೆ ಹಾಗೂ ಅರ್ಹತೆ ಮೇಲೆ<br>4. ಒಂದು ವರ್ಷ ಸ್ಥಾನಪನ್ನ ಅವಧಿ | |
| 2.2 | ಪ್ರಧಾನ ವ್ಯವಸ್ಥಾಪಕರು (ಅಭಿವೃದ್ಧಿ) | 1 | ಕ.ಆ.ಸೇ.ಗೆ ಹಿರಿಯ ಶ್ರೇಣಿಗೆ ಅನ್ವಯವಾಗುವ ವೇತನ ಶ್ರೇಣಿ (ರೂ.40050–56550) | ಉಪ ಪ್ರಧಾನ ವ್ಯವಸ್ಥಾಪಕರ ವೃಂದದಿಂದ ಬಡ್ತಿ ಮೂಲಕ ಅಥವಾ ನಿಗಮದಲ್ಲಿ ಬಡ್ತಿಗಾಗಿ ಅರ್ಹ ಅಧಿಕಾರಿಗಳು ಇಲ್ಲದಿದ್ದಾಗ ಸರ್ಕಾರದ ಮೂಲಕ ಪ್ರತಿ ನಿಯೋಜನೆ | | 1. ಉಪ ಪ್ರಧಾನ ವ್ಯವಸ್ಥಾಪಕರಾಗಿ 5 ವರ್ಷ ಸೇವೆ ಸಲ್ಲಿಸಿರಬೇಕು.<br>2. ನಿಯಮಿಸಿದ ಇಲಾಖಾ ಪರೀಕ್ಷೆಗಳನ್ನು ತೇರ್ಗಡೆಯಾಗಿರಬೇಕು.<br>3. ಜೇಷ್ಠತೆ ಹಾಗೂ ಅರ್ಹತೆ ಮೇಲೆ<br>4. ಒಂದು ವರ್ಷ ಸ್ಥಾನಪನ್ನ ಅವಧಿ | |

| ಕ್ರ. ಸಂ. | ಹುದ್ದೆಗಳ ಪ್ರವರ್ಗ | ವೃಂದದ ಸಂಖ್ಯಾಬಲ | ಪರಿಷ್ಕೃತ ವೇತನ ಶ್ರೇಣಿ | ನೇಮಕಾತಿ ವಿಧಾನ | ಅರ್ಹತೆ | | |
|---|---|---|---|---|---|---|---|
| | | | | | ನೇರ ನೇಮಕಾತಿಗಾಗಿ | ಬಡ್ತಿಗಾಗಿ | |
| 2.3 | ಪ್ರಧಾನ ವ್ಯವಸ್ಥಾಪಕರು (ಕೈ ಮತ್ತು ತ) | 1 | ಕ.ಆ.ಸೇ.ಯ ಹಿರಿಯ ಶ್ರೇಣಿಗೆ ಅನ್ವಯವಾಗುವ ವೇತನ ಶ್ರೇಣಿ (ರೂ.40050–56550) | ಉಪ ಪ್ರಧಾನ ವ್ಯವಸ್ಥಾಪಕರ ವೃಂದದಿಂದ ಬಡ್ತಿ ಮೂಲಕ ಅಥವಾ ನಿಗಮದಲ್ಲಿ ಬಡ್ತಿಗಾಗಿ ಅರ್ಹ ಅಧಿಕಾರಿಗಳು ಇಲ್ಲದಿದ್ದಾಗ ಸರ್ಕಾರದ ಮೂಲಕ ಪ್ರತಿ ನಿಯೋಜನೆ | | 1. ಉಪ ಪ್ರಧಾನ ವ್ಯವಸ್ಥಾಪಕರಾಗಿ 5 ವರ್ಷ ಸೇವೆ ಸಲ್ಲಿಸಿರಬೇಕು.<br>2. ನಿಯಮಿಸಿದ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು.<br>3. ಜೇಷ್ಠತೆ ಹಾಗೂ ಅರ್ಹತೆ ಮೇಲೆ<br>4. ಒಂದು ವರ್ಷ ಸ್ಥಾನಪನ್ನ ಅವಧಿ | |
| 2.4 | ಪ್ರಧಾನ ವ್ಯವಸ್ಥಾಪಕರು (ಹಣಕಾಸು) | 1 | (ರೂ.40050–56550) | ರಾಜ್ಯ ಲೆಕ್ಕಪತ್ರ ಇಲಾಖೆ/ಮಹಾಲೇಕಪಾಲರ ಕಛೇರಿಯಿಂದ ಪ್ರತಿ ನಿಯೋಜನೆ ಮೂಲಕ | – | – | – |
| 3 | ಉಪ ಪ್ರಧಾನ ವ್ಯವಸ್ಥಾಪಕರು | 4 | (ರೂ.36300–53850) | ಜಿಲ್ಲಾ ವ್ಯವಸ್ಥಾಪಕರು/ಸಹಾಯಕ ಪ್ರಧಾನ ವ್ಯವಸ್ಥಾಪಕರ ವೃಂದದಿಂದ ಬಡ್ತಿಯ ಮೂಲಕ | | 1. ಜಿಲ್ಲಾ ವ್ಯವಸ್ಥಾಪಕರಾಗಿ/ ಸಹಾಯಕ ಪ್ರಧಾನ ವ್ಯವಸ್ಥಾಪಕರಾಗಿ 5 ವರ್ಷ ಸೇವೆ ಸಲ್ಲಿಸಿರಬೇಕು.<br>2. ಅರ್ಹತೆಯ ಹಾಗೂ ಜೇಷ್ಠತೆ ಆಧಾರದ ಮೇಲೆ ಬಡ್ತಿ ನೀಡಬೇಕು.<br>3. ಒಂದು ವರ್ಷ ಸ್ಥಾನಪನ್ನ ಅವಧಿ | |
| 4 | ಕಂಪನಿ ಕಾರ್ಯದರ್ಶಿ | 1 | (ರೂ.36300–53850) | ನೇರ ನೇಮಕಾತಿಯ ಮೂಲಕ | ಕಂಪನಿಗಳ ಅಧಿನಿಯಮ 1956ರ ಉಪಬಂಧಗಳ ಮೇರೆಗೆ ನಿಯಮಿಸಲಾದಂತೆ ಹಾಗೆ ಐ.ಸಿಎಸ್ಐ (ಎಸಿಎಸ್)ನ ಸಹ ಸದಸ್ಯರಾಗಿರಬೇಕು. 5 ವರ್ಷ ಅನುಭವ ವಿರುವವರಿಗೆ ಆದ್ಯತೆ ನೀಡಲಾಗುವುದು. 2 ವರ್ಷಗಳ ಪ್ರೊಬೇಷನರಿ ಅವಧಿ. | | |

| ಕ್ರ. ಸಂ. | ಹುದ್ದೆಗಳ ಪ್ರವರ್ಗ | ವೃಂದದ ಸಂಖ್ಯಾಬಲ | ಪರಿಷ್ಕೃತ ವೇತನ ಶ್ರೇಣಿ | ನೇಮಕಾತಿ ವಿಧಾನ | ಅರ್ಹತೆ | | |
|---|---|---|---|---|---|---|---|
| | | | | | ನೇರ ನೇಮಕಾತಿಗಾಗಿ | ಬಡ್ತಿಗಾಗಿ | |
| 5 | ಕಾರ್ಯಪಾಲಕ ಅಭಿಯಂತರರು | 1 | (ರೂ.36300–53850) | ಲೋಕೋಪಯೋಗಿ/ ನೀರಾವರಿ ಇಲಾಖೆ ಯಿಂದ ಪ್ರತಿನಿಯೋಜನೆ | | | |
| 6 | ಹಿರಿಯ ಕಂಪ್ಯೂಟರ್ ಪ್ರೋಗ್ರಾಮರ್ | 1 | (ರೂ.30400–51300) | ಯಾವುದೇ ಸರ್ಕಾರಿ ಸಂಸ್ಥೆಗಳಿಂದ ಪ್ರತಿನಿಯೋಜನೆ ಮೂಲಕ | | | |
| 7 | ಜಿಲ್ಲಾ ವ್ಯವಸ್ಥಾಪಕರು/ ಸಹಾಯಕ ಪ್ರಧಾನ ವ್ಯವಸ್ಥಾಪಕರು | 21 | (ರೂ.28100–50100) | ಶೇ.50 ರಷ್ಟು ನೇರ ನೇಮಕಾತಿ ಶೇ.50 ರಷ್ಟು ಬಡ್ತಿ | ಅಂಗೀಕೃತ ವಿಶ್ವವಿದ್ಯಾನಿಲಯ/ಸಂಸ್ಥೆ ಯಿಂದ ಎಂ.ಬಿ.ಎ. ಪದವಿ ಪಡೆದ ಯಾರೇ ಪದವೀಧರ ಅಂಗೀಕೃತ ಸಂಸ್ಥೆಯಿಂದ ಎಂ.ಎಸ್. ಆಫೀಸ್‌ನಲ್ಲಿ ಪ್ರಮಾಣ ಪತ್ರ ಕೋರ್ಸ್ ಹೊಂದಿರಬೇಕು ಮತ್ತು 2 ವರ್ಷ ಪ್ರೊಬೇಷನರಿ ಅವಧಿ | ಬಡ್ತಿಗಾಗಿ 5 ವರ್ಷ ಸಹಾಯಕ ಜಿಲ್ಲಾ ವ್ಯವಸ್ಥಾಪಕ (ವಸೂಲಾತಿ)ರಾಗಿ ಸೇವೆ ಸಲ್ಲಿಸಿರಬೇಕು. ಅಕೌಂಟ್ಸ್ ಹೈಯರ್, ಜನರಲ್ ಲಾ ಭಾಗ– I ಮತ್ತು II, ಕಮ್ಯೂನಿಟಿ ಡೆವಲಪ್‌ಮೆಂಟ್ ಭಾಗ–– I ಮತ್ತು II, ವಿಷಯಗಳಲ್ಲಿ ತೇರ್ಗಡೆಯಾಗಿರಬೇಕು. ಒಂದು ವರ್ಷ ಸ್ಥಾನಪನ್ನ ಅವಧಿ | |
| 8 | ಸಹಾಯಕ ಕಾರ್ಯಪಾಲಕ ಅಭಿಯಂತರರು | 1 | (ರೂ.28100–50100) | ಲೋಕೋಪಯೋಗಿ/ ನೀರಾವರಿ ಇಲಾಖೆಯಿಂದ ಪ್ರತಿನಿಯೋಜನೆ ಮೂಲಕ | | | |
| 9 | ಡ್ರಿಲ್ಲಿಂಗ್ ಅಭಿಯಂತರರು | 1 | (ರೂ.24000–45300) | ಗಣಿ ಮತ್ತು ಭೂ ವಿಜ್ಞಾನ ಇಲಾಖೆ/ಯಾವುದೇ ಸರ್ಕಾರಿ ಇಲಾಖೆ/ ಸರ್ಕಾರಿ ಸಂಸ್ಥೆಗಳಿಂದ ಪ್ರತಿನಿಯೋಜನೆ ಮೂಲಕ | | | |
| 10 | ಸಹಾಯಕ ಜಿಲ್ಲಾ ವ್ಯವಸ್ಥಾಪಕರು (ವಸೂಲಾತಿ)– "ಎ" ದರ್ಜೆ | 19 | (ರೂ.24000–45300) | ಶೇ.50 ರಷ್ಟು ನೇರ ನೇಮಕಾತಿ ಶೇ.50 ರಷ್ಟು ತಾಲ್ಲೂಕು ಅಭಿವೃದ್ಧಿ ಅಧಿಕಾರಿಯಿಂದ ಬಡ್ತಿ | ಅಂಗೀಕೃತ ವಿಶ್ವವಿದ್ಯಾನಿಲಯ/ ಸಂಸ್ಥೆಯಿಂದ ಎಂ.ಬಿ.ಎ. ಪದವಿ ಪಡೆದ ಯಾರೇ ಪದವೀಧರ. ಅಂಗೀಕೃತ ಸಂಸ್ಥೆಯಿಂದ ಎಂ.ಎಸ್. | ತಾ.ಅ.ಅ.ಯಾಗಿ 5 ವರ್ಷಗಳ ಅನುಭವ. ಒಂದು ವರ್ಷ ಸ್ಥಾನಪನ್ನ ಅವಧಿ ಅಕೌಂಟ್ಸ್ ಹೈಯರ್, ಜನರಲ್ ಲಾ ಭಾಗ– I ಮತ್ತು II, ಕಮ್ಯೂನಿಟಿ ಡೆವಲಪ್‌ಮೆಂಟ್ ಭಾಗ– I ಮತ್ತು II, ವಿಷಯಗಳಲ್ಲಿ ತೇರ್ಗಡೆಯಾಗಿರಬೇಕು., | ಮಂಡಳಿಯು ತನ್ನ 189ನೇ ಸಭೆಯಲ್ಲಿ ವಸೂಲಾತಿ ಅಧಿಕಾರಿ ಹುದ್ದೆಯನ್ನು ಸಹಾಯಕ ಜಿಲ್ಲಾ ವ್ಯವಸ್ಥಾಪಕ (ವಸೂಲಾತಿ) ಎಂಬುದಾಗಿದೆ |

| ಕ್ರ. ಸಂ. | ಹುದ್ದೆಗಳ ಪ್ರವರ್ಗ | ವೃಂದದ ಸಂಖ್ಯಾಬಲ | ಪರಿಷ್ಕೃತ ವೇತನ ಶ್ರೇಣಿ | ನೇಮಕಾತಿ ವಿಧಾನ | ಅರ್ಹತೆ | | |
|---|---|---|---|---|---|---|---|
| | | | | | ನೇರ ನೇಮಕಾತಿಗಾಗಿ | ಬಡ್ತಿಗಾಗಿ | |
| | | | | | ಆಫೀಸ್‌ನಲ್ಲಿ ಪ್ರಮಾಣ ಪತ್ರ ಕೋರ್ಸ್ ಹೊಂದಿರಬೇಕು ಮತ್ತು 2 ವರ್ಷ ಸೇವಾ ಅನುಭವವಿರಬೇಕು. 2 ವರ್ಷ ಪ್ರೊಬೇಷನರಿ ಅವಧಿ | | ಮರುಪದನಾಮಕರಣ ಮಾಡಲು ಅನುಮೋದಿಸಿದೆ. |
| 11 | ಸಹಾಯಕ ಅಭಿಯಂತರರು | 3 | (ರೂ.22800–43200) | ಲೋಕೋಪಯೋಗಿ/ ನೀರಾವರಿ ಇಲಾಖೆ/ ಯಾವುದೇ ಸರ್ಕಾರಿ ಸಂಸ್ಥೆಗಳಿಂದ ಪ್ರತಿ ನಿಯೋಜನೆ ಮೂಲಕ | | | |
| 12 | ತಾಲ್ಲೂಕು ಅಭಿವೃದ್ಧಿ ಅಧಿಕಾರಿ– "ಬಿ" ದರ್ಜೆ | 117 | (ರೂ.22800–43200) | ಶೇ.75 ರಷ್ಟು ನೇರ ನೇಮಕಾತಿ ಶೇ.25 ರಷ್ಟು ಕಛೇರಿ ಅಧೀಕ್ಷಕ ವೃಂದದಿಂದ ಬಡ್ತಿ | ಅಂಗೀಕೃತ ವಿಶ್ವವಿದ್ಯಾನಿಲಯ/ ಸಂಸ್ಥೆಯಿಂದ ಎಂ.ಬಿ.ಎ. ಪದವಿ ಪಡೆದ ಪದವೀಧರ. ಅಂಗೀಕೃತ ಸಂಸ್ಥೆಯಿಂದ ಎಂ.ಎಸ್. ಆಫೀಸ್‌ನಲ್ಲಿ ಪ್ರಮಾಣ ಪತ್ರದ ಕೋರ್ಸ್ ಹೊಂದಿರಬೇಕು. 2 ವರ್ಷ ಪ್ರೊಬೇಷನರಿ ಅವಧಿ | ಕಛೇರಿ ಅಧಿಕ್ಷಕರಾಗಿ 5 ವರ್ಷಗಳ ಸೇವೆಯ ಅನುಭವ. ಅಕೌಂಟ್ಸ್ ಹೈಯರ್, ಜನರಲ್ ಲಾ ಭಾಗ– I ಮತ್ತು II, ಕಮ್ಯೂನಿಟಿ ಡೆವಲಪ್‌ಮೆಂಟ್ ಭಾಗ– I ಮತ್ತು II, ವಿಷಯಗಳಲ್ಲಿ ತೇರ್ಗಡೆಯಾಗಿರಬೇಕು. ಒಂದು ವರ್ಷ ಸ್ಥಾನಪನ್ನ ಅವಧಿ. | ತಾಲ್ಲೂಕು ಮಟ್ಟದಲ್ಲಿನ ಏಕೈಕ ಹುದ್ದೆಯಾಗಿದ್ದು, ಅವರು ನಿಗಮದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಲ್ಲಿ ಇತರೆ ಇಲಾಖೆಗಳ ತಾಲ್ಲೂಕು ಮಟ್ಟದ ಅಧಿಕಾರಿಗಳೊಂದಿಗೆ ಸಮನ್ವಯತೆ ಹೊಂದಿರಬೇಕು. ಅವರು, ಸಮಿತಿಯ ಸದಸ್ಯರೆಲ್ಲರು ತಾಲ್ಲೂಕು ಮಟ್ಟದ ಅಧಿಕಾರಿಗಳಾಗಿರುವ ಸಂಬಂಧಪಟ್ಟ ಚುನಾವಣಾ ಕ್ಷೇತ್ರಗಳ ಶಾಸಕರ ನೇತೃತ್ವದ ಫಲಾನುಭವಿ ಆಯ್ಕೆ ಸಮಿತಿಯ ಸದಸ್ಯ– ಕಾರ್ಯದರ್ಶಿ ಸಹ ಆಗಿರುತ್ತಾರೆ. |

| ಕ್ರ. ಸಂ. | ಹುದ್ದೆಗಳ ಪ್ರವರ್ಗ | ವೃಂದದ ಸಂಖ್ಯಾಬಲ | ಪರಿಷ್ಕೃತ ವೇತನ ಶ್ರೇಣಿ | ನೇಮಕಾತಿ ವಿಧಾನ | ಅರ್ಹತೆ | | |
|---|---|---|---|---|---|---|---|
| | | | | | ನೇರ ನೇಮಕಾತಿಗಾಗಿ | ಬಡ್ತಿಗಾಗಿ | |
| | | | | | | | ಆದುದರಿಂದ ತಾ.ಅ.ಅ. ಹುದ್ದೆಯನ್ನು "ಸಿ' ದರ್ಜೆಯಿಂದ "ಬಿ" ದರ್ಜೆಗೆ ಮೇಲ್ದರ್ಜೆಗೇರಿಸಲು ಉದ್ದೇಶಿಸಿದೆ. |
| 13 | ಆಂತರಿಕ ಲೆಕ್ಕಪರಿಶೋಧಕ | 1 | (ರೂ.21600–40050) | ಮಹಾಲೇಖಪಾಲರ ಕಛೇರಿ/ರಾ.ಲೆ.ಇ/ಯ ಒಂದೇ ವೇತನ ಶ್ರೇಣಿಯಲ್ಲಿನ ಸಮಾನ ಪದವೃಂದದ ಹುದ್ದೆಯಿಂದ ಪ್ರತಿನಿಯೋಜನೆ ಮೂಲಕ | | | |
| 14 | ಕಛೇರಿ ಅಧೀಕ್ಷಕರು | 30 | (ರೂ.20000–36300) | ಶೇ.50ರಷ್ಟು ಪ್ರ.ದ.ಸ.ರಿಂದ, ಶೇ.45ರಷ್ಟು ಲೆಕ್ಕ ಸಹಾಯಕರಿಂದ ಮತ್ತು ಶೇ.5ರಷ್ಟು ಶೀಘ್ರಲಿಪಿಗಾರರಿಂದ ಬಡ್ತಿ ಮೂಲಕ | | ಪ್ರ.ದ.ಸ ರಾಗಿ 5 ವರ್ಷಗಳ ಸೇವಾನುಭವ ಶೀಘ್ರಲಿಪಿಗಾರರು, ಲೆಕ್ಕ ಸಹಾಯಕರು ಅಕೌಂಟ್ಸ್ ಹೈಯರ್, ಜನರಲ್ ಲಾ ಭಾಗ–I ಮತ್ತು II, ಕಮ್ಯೂನಿಟಿ ಡೆವಲಪ್‌ಮೆಂಟ್ ಭಾಗ–I ಮತ್ತು II ವಿಷಯಗಳಲ್ಲಿ ತೇರ್ಗಡೆಯಾಗಿರಬೇಕು. ಶೀಘ್ರಲಿಪಿಗಾರ ಸಂದರ್ಭದಲ್ಲಿ ವ್ಯಕ್ತಿಯು ಪ್ರ.ದ.ಸ.ನಾಗಿ ಒಂದು ವರ್ಷ ಕಾಲ ಕಾರ್ಯನಿರ್ವಹಿಸರಬೇಕು. ಒಂದು ವರ್ಷ ಸ್ಥಾನಪನ್ನ ಅವಧಿ. | |
| 15 | ಲೆಕ್ಕ ಸಹಾಯಕರು | 24 | (ರೂ.14550–26700) | ಶೇ. 75ರಷ್ಟು ನೇರ ನೇಮಕಾತಿ, ದ್ವಿ.ದ.ಸ ಹಾಗೂ ಕಂಪ್ಯೂಟರ ಆಪರೇಟರ್ ಮತ್ತು ಕಂಪ್ಯೂಟರ್ ಆಪರೇಟರ್ – ಹಾಗೂ – ಬೆರಳಚ್ಚುಗಾರರಿಂದ 3 : 1ರ ಅನುಪಾತದಲ್ಲಿ ಶೇ 25ರಷ್ಟು ಬಡ್ತಿಯ ಮೂಲಕ | ಅಂಗೀಕೃತ ವಿಶ್ವವಿದ್ಯಾನಿಲಯದಿಂದ ಕನಿಷ್ಠ ಶೇ.50ರಷ್ಟು ಅಂಕಗಳೊಂದಿಗೆ ಬಿ.ಕಾಂ. ಪದವಿ ಅಂಗೀಕೃತ ಸಂಸ್ಥೆಯಿಂದ ಲೆಕ್ಕ ವಿಷಯದಲ್ಲಿ ಪ್ರಮಾಣ ಪತ್ರ ಕೋರ್ಸ್ | ದ್ವಿ.ದ.ಸ,–ಹಾಗೂ– ಕಂಪ್ಯೂಟರ್ ಆಪರೇಟರ್/ ಮತ್ತು ಕಂಪ್ಯೂಟರ್ ಆಪರೇಟರ್ – ಹಾಗೂ– ಬೆರಳಚ್ಚುಗಾರರಾಗಿ 5 ವರ್ಷ ಸೇವೆ ಸಲ್ಲಿಸಿರಬೇಕು. ಅಕೌಂಟ್ಸ್ ಹೈಯರ್, ಜನರಲ್ ಲಾ ಭಾಗ–I ಮತ್ತು II, ಕಮ್ಯೂನಿಟಿ ಡೆವಲಪ್‌ಮೆಂಟ್ ಭಾಗ–I ಮತ್ತು II ವಿಷಯದಲ್ಲಿ | |

| ಕ್ರ. ಸಂ. | ಹುದ್ದೆಗಳ ಪ್ರವರ್ಗ | ವೃಂದದ ಸಂಖ್ಯಾಬಲ | ಪರಿಷ್ಕೃತ ವೇತನ ಶ್ರೇಣಿ | ನೇಮಕಾತಿ ವಿಧಾನ | ಅರ್ಹತೆ | | |
|---|---|---|---|---|---|---|---|
| | | | | | ನೇರ ನೇಮಕಾತಿಗಾಗಿ | ಬಡ್ತಿಗಾಗಿ | |
| | | | | | ಹೊಂದಿರಬೇಕು. 2 ವರ್ಷ ಕೆಲಸದ ಅನುಭವವಿರಬೇಕು. 2 ವರ್ಷ ಪ್ರೊಬೇಷನರಿ ಅವಧಿ | ತೇರ್ಗಡೆಯಾಗಿರಬೇಕು. ಒಂದು ವರ್ಷ ಸ್ಥಾನಪನ್ನ ಅವಧಿ. | |
| 16 | ಶೀಘ್ರಲಿಪಿಗಾರರು | 3 | (ರೂ.14550–26700) | ಶೇ. 67ರಷ್ಟು ನೇರ ನೇಮಕಾತಿ, ಕಂಪ್ಯೂಟರ್ ಆಪರೇಟರ್ – ಹಾಗೂ– ಬೆರಳಚ್ಚುಗಾರರ ವೃಂದದಿಂದ ಶೇ.33ರಷ್ಟು ಬಡ್ತಿ ಮೂಲಕ | ಅಂಗೀಕೃತ ಮಂಡಳಿ/ ಸಂಸ್ಥೆಗಳಿಂದ ಪಿ.ಯು.ಸಿ/12ನೇ ತರಗತಿ ಅಥವಾ ಕಮರ್ಷಿಯಲ್ ಪ್ರಾಕ್ಟೀಸ್‌ನ ಡಿಪ್ಲೋಮೋದಲ್ಲಿ ತೇರ್ಗಡೆ ಹೊಂದಿರಬೇಕು. ಹಿರಿಯ ಕನ್ನಡ ಶೀಘ್ರಲಿಪಿಯಾಗಿರಬೇಕು. (ಆಂಗ್ಲ ಐಚ್ಛಿಕ) ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಹಿರಿಯ ಬೆರಳಚ್ಚುಗಾರರಾಗಿರಬೇಕು ಅಂಗೀಕೃತ ಸಂಸ್ಥೆಯಿಂದ ಎಂ.ಎಸ್. ಆಫೀಸ್‌ನಲ್ಲಿ ಪ್ರಮಾಣ ಪತ್ರ ಕೋರ್ಸ್ ಹೊಂದಿರಬೇಕು. 2 ವರ್ಷ ಪ್ರೊಬೇಷನರಿ ಅವಧಿ | ಕಂಪ್ಯೂಟರ್ ಆಪರೇಟರ್ (ಬೆರಳಚ್ಚುಗಾರರು)ರಾಗಿ 5 ವರ್ಷ ಸೇವೆ ಸಲ್ಲಿಸಿರಬೇಕು. ಕನ್ನಡ ಭಾಷೆಯ ಹಿರಿಯ ಶೀಘ್ರಲಿಪಿಯಲ್ಲಿ ತೇರ್ಗಡೆಯಾಗಿರಬೇಕು(ಆಂಗ್ಲ ಐಚ್ಛಿಕ). ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಹಿರಿಯ ಬೆರಳಚ್ಚುಗಾರರಾಗಿರಬೇಕು. ಒಂದು ವರ್ಷ ಸ್ಥಾನಪನ್ನ ಅವಧಿ ಅಕೌಂಟ್ಸ್ ಹೈಯರ್, ಜನರಲ್ ಲಾ ಭಾಗ–I ಮತ್ತು II ವಿಷಯದಲ್ಲಿ ತೇರ್ಗಡೆಯಾಗಿರಬೇಕು. | |
| 17 | ಪ್ರಥಮ ದರ್ಜೆ ಸಹಾಯಕರು | 30 | (ರೂ.14550–26700 | ಶೆ.50ರಷ್ಟು ನೇರ ನೇಮಕಾತಿ ಮತ್ತು ಶೇ.50ರಷ್ಟು ದ್ವಿತಿಯ ದರ್ಜೆ ಸಹಾಯಕರು ಹಾಗೂ ಕಂಪ್ಯೂಟರ್ ಆಪರೇಟರ್ ಮತ್ತು | ಅಂಗೀಕೃತ ವಿಶ್ವವಿದ್ಯಾನಿಲಯದಿಂದ ಕನಿಷ್ಠ ಶೇ.50ರಷ್ಟು ಅಂಕಗಳೊಂದಿಗೆ | ದ್ವಿತೀಯ ದರ್ಜೆ ಸಹಾಯಕರು ಹಾಗೂ ಕಂಪ್ಯೂಟರ್ ಆಪರೇಟರ್ ಮತ್ತು ಕಂಪ್ಯೂಟರ್ ಆಪರೇಟರ್ ಹಾಗೂ ಬೆರಳಚ್ಚುಗಾರರಾಗಿ 5 ವರ್ಷ ಸೇವೆ | |

| ಕ್ರ. ಸಂ. | ಹುದ್ದೆಗಳ ಪ್ರವರ್ಗ | ವೃಂದದ ಸಂಖ್ಯಾಬಲ | ಪರಿಷ್ಕೃತ ವೇತನ ಶ್ರೇಣಿ | ನೇಮಕಾತಿ ವಿಧಾನ | ಅರ್ಹತೆ | | |
|---|---|---|---|---|---|---|---|
| | | | | | ನೇರ ನೇಮಕಾತಿಗಾಗಿ | ಬಡ್ತಿಗಾಗಿ | |
| | | | | ಕಂಪ್ಯೂಟರ್ ಆಪರೇಟರ್ ಹಾಗೂ ಬೆರಳಚ್ಚುಗಾರರ ವೃಂದದಿಂದ 3 : 1 ಅನುಪಾತದಲ್ಲಿ ಬಡ್ತಿಯ ಮೂಲಕ | ಯಾವುದೇ ಪದವಿ. ಅಂಗೀಕೃತ ಸಂಸ್ಥೆಯಿಂದ ಎಂ.ಎಸ್. ಆಫೀಸ್‌ನಲ್ಲಿ ಪ್ರಮಾಣ ಪತ್ರ ಕೋರ್ಸ್ ಹೊಂದಿರಬೇಕು. 2 ವರ್ಷ ಪ್ರೊಬೇಷನರಿ ಅವಧಿ | ಸಲ್ಲಿಸಿರಬೇಕು. ಅಕೌಂಟ್ಸ್ ಹೈಯರ್, ಜನರಲ್ ಲಾ ಭಾಗ–I ಮತ್ತು II, ವಿಷಯದಲ್ಲಿ ತೇರ್ಗಡೆಯಾಗಿರಬೇಕು. ಒಂದು ವರ್ಷ ಸ್ಥಾನಪನ್ನ ಅವಧಿ. | |
| 18 | ದ್ವಿತೀಯ ದರ್ಜೆ ಸಹಾಯಕರು ಹಾಗೂ ಕಂಪ್ಯೂಟರ್ ಆಪರೇಟರ್ | 49 | (ರೂ.11600–21000) | ಶೇ.75ರಷ್ಟು ನೇರ ನೇಮಕಾತಿ ಹಾಗೂ ಶೇ.25ರಷ್ಟು ದಲಾಯಿತರ ಬಡ್ತಿ ಮೂಲಕ | ಅಂಗೀಕೃತ ವಿಶ್ವವಿದ್ಯಾನಿಲಯದಿಂದ ಪದವಿ ಹೊಂದಿರಬೇಕು. ಅಂಗೀಕೃತ ಸಂಸ್ಥೆಯಿಂದ ಎಂ.ಎಸ್. ಆಫೀಸ್ ಕೋರ್ಸ್ ಮಾಡಿರುವ ಪ್ರಮಾಣ ಪತ್ರವನ್ನು ಹೊಂದಿರಬೇಕು. 2 ವರ್ಷ ಪ್ರೊಬೇಷನರಿ ಅವಧಿ | ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾಗಿರುಬೇಕು. ದಲಾಯಿತರಾಗಿ 5 ವರ್ಷ ಸೇವೆ ಸಲ್ಲಿಸರಬೇಕು. ಒಂದು ವರ್ಷ ಸ್ಥಾನಪನ್ನ ಅವಧಿ. | ದ್ವಿ.ದ.ಸ ಮತ್ತು ಗುಮಾಸ್ತ ಹಾಗೂ ಬೆರಳಚ್ಚುಗಾರರ ಹುದ್ದೆಗಳನ್ನು ವಿಲೀನಗೊಳಿಸಿ, ಮತ್ತು ಅವುಗಳನ್ನು ದ್ವಿತೀಯ ದರ್ಜೆ ಸಹಾಯಕ ಹಾಗೂ ಕಂಪ್ಯೂಟರ್ ಆಪರೇಟರ್ ಎಂಬುದಾಗಿ ಮರು ಪದನಾಮೀಕರಿಸಲು ಉದ್ದೇಶಿಸಲಾಗಿದೆ. |
| 19 | ಕಂಪ್ಯೂಟರ್ ಆಪರೇಟರ್ ಹಾಗೂ ಬೆರಳಚ್ಚುಗಾರರು | 16 | (ರೂ.11600–21000) | ಶೇ.100ರಷ್ಟು ನೇರ ನೇಮಕಾತಿ ಮೂಲಕ | ಅಂಗೀಕೃತ ಮಂಡಳಿ/ಸಂಸ್ಥೆಯಿಂದ ಪಿ.ಯು.ಸಿ/12ನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು. ಕನ್ನಡ ಮತ್ತು ಅಂಗ್ಲ ಭಾಷೆಯಲ್ಲಿ ಹಿರಿಯ ಬೆರಳಚ್ಚುಗಾರರಾಗಿರಬೇಕು. ಅಂಗೀಕೃತ ಸಂಸ್ಥೆಯಿಂದ ಎಂ.ಎಸ್. ಆಫೀಸ್‌ನಲ್ಲಿ ಪ್ರಮಾಣ ಪತ್ರ ಕೋರ್ಸ್ ಹೊಂದಿರಬೇಕು. 2 ವರ್ಷ ಪ್ರೊಬೇಷನರಿ ಅವಧಿ | | ಬೆರಳಚ್ಚುಗಾರರ ಹುದ್ದೆಯನ್ನು ಕಂಪ್ಯೂಟರ್ ಆಪರೇಟರ್ ಹಾಗೂ ಬೆರಳಚ್ಚುಗಾರ ಹುದ್ದೆ ಎಂಬುದಾಗಿ ಮರು ಪದನಾಮಕರಣ ಮಾಡಲಾಗಿದೆ. |

| ಕ್ರ. ಸಂ. | ಹುದ್ದೆಗಳ ಪ್ರವರ್ಗ | ವೃಂದದ ಸಂಖ್ಯಾಬಲ | ಪರಿಷ್ಕೃತ ವೇತನ ಶ್ರೇಣಿ | ನೇಮಕಾತಿ ವಿಧಾನ | ಅರ್ಹತೆ | | |
|---|---|---|---|---|---|---|---|
| | | | | | ನೇರ ನೇಮಕಾತಿಗಾಗಿ | ಬಡ್ತಿಗಾಗಿ | |
| 20 | ಹಿರಿಯ ವಾಹನ ಚಾಲಕರು | 5 | (ರೂ.14550–26700) | ವಾಹನ ಚಾಲಕರ ವೃಂದದಿಂದ ಬಡ್ತಿಯ ಮೂಲಕ | | ವಾಹನ ಚಾಲಕರಾಗಿ 10 ವರ್ಷ ಸೇವೆ ಸಲ್ಲಿಸಿರಬೇಕು. | ಹುದ್ದೆಯನ್ನು ಮೇಲ್ದರ್ಜೆಗೇರಿಸಲಾಗಿದೆ. |
| 21 | ವಾಹನ ಚಾಲಕರು | 17 | (ರೂ.11600–21000) | ನೇರ ನೇಮಕಾತಿಯ ಮೂಲಕ | ಲಘು ಮೋಟಾರ್ ವಾಹನ ಚಾಲನಾ ಪರವಾನಗಿ ಜೊತೆಗೆ ಎಸ್.ಎಸ್.ಎಲ್.ಸಿಯಲ್ಲಿ ತೇರ್ಗಡೆಯಾಗಿರಬೇಕು. ವಾಹನ ಚಾಲನೆಯಲ್ಲಿ 2 ವರ್ಷ ಅನುಭವವಿರಬೇಕು. 2 ವರ್ಷ ಪ್ರೊಬೇಷನರಿ ಅವಧಿ. | | |
| 22 | ದಲಾಯಿತರು | 32 | (ರೂ.9600–14550) | ನೇರ ನೇಮಕಾತಿಯ ಮೂಲಕ | ಎಸ್.ಎಸ್.ಎಲ್.ಸಿಯಲ್ಲಿ ತೇರ್ಗಡೆಯಾಗಿರಬೇಕು. 2 ವರ್ಷ ಪ್ರೊಬೇಷನರಿ ಅವಧಿ. | | |
| | ಒಟ್ಟು | **381** | | | | | |

**ಅನುಸೂಚಿ – III**

**ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತದ ವಿವಿಧ ಹುದ್ದೆಗಳಿಗೆ ಗೊತ್ತುಪಡಿಸಲಾದ ಇಲಾಖಾ ಪರೀಕ್ಷೆಗಳು**

| ಅನುಸೂಚಿ–I ರಲ್ಲಿರುವ ಹುದ್ದೆಯ ಕ್ರ.ಸಂ. | ಅನುಸೂಚಿ–I ರಲ್ಲಿದ್ದಂತೆ ಹುದ್ದೆಯ ಪ್ರವರ್ಗ | ಇಲಾಖಾ ಪರೀಕ್ಷೆಗಳು |
|---|---|---|
| 7 | ಜಿಲ್ಲಾ ವ್ಯವಸ್ಥಾಪಕರು | ಅಕೌಂಟ್ಸ್ ಹೈಯರ್, ಜನರಲ್ ಲಾ ಭಾಗ–I ಮತ್ತು II, ಕಮ್ಯೂನಿಟಿ ಡೆವಲಪ್‌ಮೆಂಟ್ ಭಾಗ–I ಮತ್ತು II |
| 10 | ಸಹಾಯಕ ಜಿಲ್ಲಾ ವ್ಯವಸ್ಥಾಪಕರು (ವಸೂಲಾತಿ) – ದರ್ಜೆ "ಎ" | |
| 12 | ತಾಲ್ಲೂಕು ಅಭಿವೃದ್ಧಿ ಅಧಿಕಾರಿ– ದರ್ಜೆ "ಬಿ" | |
| 14 | ಕಛೇರಿ ಅಧೀಕ್ಷಕರು | |
| 15 | ಲೆಕ್ಕ ಸಹಾಯಕರು | |
| 16 | ಶೀಘ್ರಲಿಪಿಗಾರರು | ಅಕೌಂಟ್ಸ್ ಹೈಯರ್, ಜನರಲ್ ಲಾ ಭಾಗ–I ಮತ್ತು II, |
| 17 | ಪ್ರಥಮ ದರ್ಜೆ ಸಹಾಯಕರು | |
| 18 | ದ್ವಿತೀಯ ದರ್ಜೆ ಸಹಾಯಕರು ಹಾಗೂ ಕಂಪ್ಯೂಟರ್ ಆಪರೇಟರ್ | |
| 19 | ಕಂಪ್ಯೂಟರ್ ಆಪರೇಟರ್ | |

## ಅನುಸೂಚಿ– IV

### ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತದ ಸಿಬ್ಬಂದಿ ವರ್ಗದಲ್ಲಿನ ಹುದ್ದೆಗಳು

### (ನೇರ ನೇಮಕಾತಿ ಮತ್ತು ಬಡ್ತಿ ಹುದ್ದೆಗಳು)–1

| ಅನುಸೂಚಿ–I ರಲ್ಲಿರುವ ಹುದ್ದೆಯ ಕ್ರ.ಸಂ. | ಅನುಸೂಚಿ–I ರಲ್ಲಿದ್ದಂತೆ ಹುದ್ದೆಯ ಪ್ರವರ್ಗ | ನೇಮಕಾತಿ ಪ್ರಾಧಿಕಾರ | ಶಿಸ್ತು ಪ್ರಾಧಿಕಾರ | ದಂಡನೆಗಳು | ಅಪೀಲು ಪ್ರಾಧಿಕಾರ |
|---|---|---|---|---|---|
| 2 | ಪ್ರಧಾನ ವ್ಯವಸ್ಥಾಪಕರು | ವ್ಯವಸ್ಥಾಪಕ ನಿರ್ದೇಶಕರು | ವ್ಯವಸ್ಥಾಪಕ ನಿರ್ದೇಶಕರು | ಕರ್ನಾಟಕ ಸಿವಿಲ್ ಸೇವಾ (ಸಿ.ಸಿ.ಎ) ನಿಯಮಗಳ ಅನ್ವಯ ಸಣ್ಣ ಪ್ರಮಾಣದ ದಂಡನೆ ಮತ್ತು ದೊಡ್ಡ ಪ್ರಮಾಣದ ದಂಡನೆಗಳನ್ನು ಮಂಡಳಿಯ ಅನುಮೋದನೆ ಪಡೆದು ವ್ಯವಸ್ಥಾಪಕ ನಿರ್ದೇಶಕರು ವಿಧಿಸಬಹುದು. | ಮಂಡಳಿ |
| 3 | ಉಪ ಪ್ರಧಾನ ವ್ಯವಸ್ಥಾಪಕರು | | | | |
| 4 | ಕಂಪನಿ ಕಾರ್ಯದರ್ಶಿ | | | | |
| 7 | ಜಿಲ್ಲಾ ವ್ಯವಸ್ಥಾಪಕರು | | | | |
| 10 | ಸಹಾಯಕ ಜಿಲ್ಲಾ ವ್ಯವಸ್ಥಾಪಕರು (ವಸೂಲಾತಿ) – ದರ್ಜೆ "ಎ" | | | | |
| 12 | ತಾಲ್ಲೂಕು ಅಭಿವೃದ್ಧಿ ಅಧಿಕಾರಿ– ದರ್ಜೆ "ಬಿ" | | | | |
| 14 | ಕಛೇರಿ ಅಧೀಕ್ಷಕರು | | | | |
| 15 | ಲೆಕ್ಕ ಸಹಾಯಕರು | | | | |
| 16 | ಶೀಘ್ರಲಿಪಿಗಾರರು | | | | |
| 17 | ಪ್ರಥಮ ದರ್ಜೆ ಸಹಾಯಕರು | | | | |
| 18 | ದ್ವಿತೀಯ ದರ್ಜೆ ಸಹಾಯಕರು ಹಾಗೂ ಕಂಪ್ಯೂಟರ್ ಆಪರೇಟರ್ | | | | |
| 19 | ಕಂಪ್ಯೂಟರ್ ಆಪರೇಟರ್ | | | | |
| 20 | ವಾಹನ ಚಾಲಕರು | | | | |
| 21 | ದಲಾಯಿತ | | | | |

## ಅನುಸೂಚಿ– V

### ಪ್ರತಿ ನಿಯೋಜನೆ ಹುದ್ದೆಗಳಿಗೆ ಸಂಬಂಧಿಸಿದಂತೆ ನೇಮಕಾತಿ ಪ್ರಾಧಿಕಾರ, ಶಿಸ್ತು ಪ್ರಾಧಿಕಾರ ಮತ್ತು ಅಪೀಲು ಪ್ರಾಧಿಕಾರ

| ಅನುಸೂಚಿ–I ರಲ್ಲಿರುವ ಹುದ್ದೆಯ ಕ್ರ.ಸಂ. | ಅನುಸೂಚಿ–I ರಲ್ಲಿದ್ದಂತೆ ಹುದ್ದೆಯ ಪ್ರವರ್ಗ | ಶಿಸ್ತು ಪ್ರಾಧಿಕಾರ | ದಂಡನೆಗಳು | ಅಪೀಲು ಪ್ರಾಧಿಕಾರ |
|---|---|---|---|---|
| **ಪ್ರತಿ ನಿಯೋಜನೆ ಹುದ್ದೆಗಳ 1.1** | | | | |
| 1 | ವ್ಯವಸ್ಥಾಪಕ ನಿರ್ದೇಶಕರು | ಎಲ್ಲಾ ಪ್ರತಿ ನಿಯೋಜನೆ ಹುದ್ದೆಗಳಿಗಾಗಿ ಶಿಸ್ತು ಪ್ರಾಧಿಕಾರ, ದಂಡನೆ ಮತ್ತು ಅಪೀಲು ಪ್ರಾಧಿಕಾರಗಳು ಕರ್ನಾಟಕ ಸಿವಿಲ್ ಸೇವಾ (ಸಿ.ಸಿ.ಎ) ನಿಯಮಗಳು/ಅನ್ವಯವಾಗುವ ಇತರೆ | | |
| 2 | ಪ್ರಧಾನ ವ್ಯವಸ್ಥಾಪಕರು (ಹ) | | | |

| | | |
|---|---|---|
| 5 | ಕಾರ್ಯಪಾಲಕ ಅಭಿಯಂತರರು | ಯಾವುದೇ ನಿಯಮಗಳು ಮತ್ತು ಅಖಿಲ ಭಾರತ ಸೇವಾ ನಡತೆ ನಿಯಮಗಳ ಅನ್ವಯ ಇರುತ್ತವೆ. |
| 6 | ಹಿರಿಯ ಕಂಪ್ಯೂಟರ್ ಪ್ರೋಗ್ರಾಮರ್ | |
| 8 | ಸಹಾಯಕ ಕಾರ್ಯಪಾಲಕ ಅಭಿಯಂತರರು | |
| 9 | ಡ್ರಿಲ್ಲಿಂಗ್ ಅಭಿಯಂತರರು | |
| 11 | ಸಹಾಯಕ ಅಭಿಯಂತರರು | |
| 13 | ಲೆಕ್ಕ ಪರಿಶೋಧಕರು | |

**ಅನುಸೂಚಿ– VI**

1. **ನೇಮಕಾತಿ ಸಮಿತಿ:** ನೇಮಕಾತಿಗಾಗಿ ಇರುವ ನೇಮಕಾತಿ ಸಮಿತಿಯು ಈ ಮುಂದಿನ ಅಧಿಕಾರಿಗಳನ್ನು ಒಳಗೊಂಡಿರತಕ್ಕದ್ದು.
   1. ವ್ಯವಸ್ಥಾಪಕ ನಿರ್ದೇಶಕರು, ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ –ಅಧ್ಯಕ್ಷರು
   2. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ –ಸದಸ್ಯರು
   3. ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ –ಸದಸ್ಯರು
   4. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ –ಸದಸ್ಯರು
   5. ಸರ್ಕಾರದ ಉಪ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ –ಸದಸ್ಯರು
   6. ಸರ್ಕಾರದ ಉಪ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ –ಸದಸ್ಯರು
   7. ಸರ್ಕಾರದ ಉಪ ಕಾರ್ಯದರ್ಶಿಗಳು, ಸಾರ್ವಜನಿಕ ಉದ್ಯಮಗಳ ಇಲಾಖೆ –ಸದಸ್ಯರು
   8. ಪ್ರಧಾನ ವ್ಯವಸ್ಥಾಪಕರು(ಸಿ ಮತ್ತು ಆ), ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ –ಸದಸ್ಯ–ಕಾರ್ಯದರ್ಶಿ

   ಒಂದು ವೇಳೆ, ಸಮಾಜ ಕಲ್ಯಾಣ ಇಲಾಖೆಯ ಆಯುಕ್ತರು, ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರಿಗಿಂತ ಹಿರಿಯರಾಗಿದ್ದರೆ ಆಗ ಅವರೇ ಅಧ್ಯಕ್ಷರಾಗಿರತಕ್ಕದ್ದು.

2. **ಬಡ್ತಿ ಸಮಿತಿ**: ಇಲಾಖೆಯ ಬಡ್ತಿ ಸಮಿತಿಯು ಈ ಮುಂದಿನ ಅಧಿಕಾರಿಗಳನ್ನು ಒಳಗೊಂಡಿರತಕ್ಕದ್ದು.
   1. ವ್ಯವಸ್ಥಾಪಕ ನಿರ್ದೇಶಕರು, ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ –ಅಧ್ಯಕ್ಷರು
   2. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಅಥವಾ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆ ಇರದ ಅವರ ನಾಮನಿರ್ದೇಶಿತ ವ್ಯಕ್ತಿ –ಸದಸ್ಯರು
   3. ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ –ಸದಸ್ಯರು
   4. ಸರ್ಕಾರದ ಉಪ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ –ಸದಸ್ಯರು
   5. ಪ್ರಧಾನ ವ್ಯವಸ್ಥಾಪಕರು(ಅಭಿವೃದ್ಧಿ), ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ – ಸದಸ್ಯರು
   6. ಪ್ರಧಾನ ವ್ಯವಸ್ಥಾಪಕರು(ಸಿ ಮತ್ತು ಆ), ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ –ಸದಸ್ಯ–ಕಾರ್ಯದರ್ಶಿ

   ಬಡ್ತಿಗಾಗಿ ಅರ್ಹತೆ ಹೊಂದಲು ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಬೇಕು ಮತ್ತು ಒಂದು ವರ್ಷ ಸ್ಥಾನಪನ್ನ ಅವಧಿಯನ್ನು ನಿಗದಿಪಡಿಸಲಾಗಿದೆ.

   ಬಡ್ತಿಯ ಹಾಲಿ ಹುದ್ದೆಯಲ್ಲಿ 5 ವರ್ಷಗಳ ಸೇವೆ ಸಲ್ಲಿಸಿರುವ ಪ.ಜಾತಿ/ಪ.ಪಂ.ದ ಅಭ್ಯರ್ಥಿಗಳು ಲಭ್ಯವಿರದಿರುವ ಸಂದರ್ಭಗಳಲ್ಲಿ 5 ವರ್ಷಗಳ ಸೇವಾ ಅಗತ್ಯತೆಗೆ ಪ್ರತಿಯಾಗಿ 3 ವರ್ಷಗಳ ಸೇವೆಯನ್ನು ಪೂರೈಸಿರುವ ಪ.ಜಾ/ಪ.ಪಂ.ದ ನೌಕರರನ್ನು ಸಹ ಸರ್ಕಾರಿ ಆದೇಶ ಸಂಖ್ಯೆ; ಸಿಆಸುಇ 126 ಎಸ್.ಸಿ.ಆರ್. 82 ದಿ: 26.11.1982 ರ ಅನ್ವಯ ಬಡ್ತಿಗಾಗಿ ಪರಿಗಣಿಸಲಾಗುವುದು.

   **ನೇಮಕಾತಿ ಮತ್ತು ಬಡ್ತಿ ಆದೇಶವನ್ನು ನಿರ್ದೇಶಕರ ಮಂಡಳಿಯ ಅನುಮೋದನೆಯೊಂದಿಗೆ ಹೊರಡಿಸತಕ್ಕದ್ದು.**

**ಹುದ್ದೆಗಳ ನೇಮಕಾತಿ ವಿಧಾನ:**

1. **ಕಂಪನಿ ಕಾರ್ಯದರ್ಶಿ :** ನೇಮಕಾತಿ ಸಮಿತಿಯಿಂದ ಸಂದರ್ಶನದ ಮೂಲಕ ಆಯ್ಕೆ.

2. **ಜಿಲ್ಲಾ ವ್ಯವಸ್ಥಾಪಕರು/ಸಹಾಯಕ ಜಿಲ್ಲಾ ವ್ಯವಸ್ಥಾಪಕರು (ವಸೂಲಾತಿ)/ತಾಲ್ಲೂಕು ಅಭಿವೃದ್ಧಿ ಅಧಿಕಾರಿ** :– ಈ ಕೆಳಕಂಡ ಲಿಖಿತ ಪರೀಕ್ಷೆ ಮತ್ತು ವ್ಯಕ್ತಿತ್ವ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ನೇಮಕಾತಿ ಸಮಿತಿಯ ಮೂಲಕ ನೇಮಕಾತಿ ಮಾಡಲಾಗುವುದು.

1. **ಲಿಖಿತ ಪರೀಕ್ಷೆ:** ಎ) ಸಾಮಾನ್ಯ ಜ್ಞಾನ, ಸಾಮಾನ್ಯ ಆಂಗ್ಲ ಬಾಷೆ –150 ಅಂಕಗಳು
ಬಿ) ತಾರ್ಕಿಕ, ಸಂಖ್ಯಾ ಸಾಮರ್ಥ್ಯ ಮತ್ತು ಮಾನಸಿಕ ಸಾಮರ್ಥ್ಯ ಪರೀಕ್ಷೆ – 150 ಅಂಕಗಳು

2. **ವ್ಯಕ್ತಿತ್ವ ಪರೀಕ್ಷೆ:** ಎ) ಜಿಲ್ಲಾ ವ್ಯವಸ್ಥಾಪಕರಿಗೆ ಮಾತ್ರ – 20 ಅಂಕಗಳು

**ಸೂಚನೆ** ಎ) ಸಹಾಯಕ ಜಿಲ್ಲಾ ವ್ಯವಸ್ಥಾಪಕರು (ವಸೂಲಾತಿ)/ತಾಲ್ಲೂಕು ಅಭಿವೃದ್ಧಿ ಅಧಿಕಾರಿಗಳಿಗೆ ವ್ಯಕ್ತಿತ್ವ ಪರೀಕ್ಷೆ ಇರುವುದಿಲ್ಲ.

ಬಿ) ಪ್ರಶ್ನೆ ಪತ್ರಿಕೆಗಳಲ್ಲಿ ಉತ್ತರಿಸಲು ಕಷ್ಟವಾದ ಪ್ರಮಾಣದ ಮಟ್ಟವು ಬೇರೆ ಬೇರೆ ವೃಂದಗಳಿಗೆ ಬೇರೆ ಬೇರೆಯಾಗಿರಬಹುದು.

3. **ಪ್ರಥಮ ದರ್ಜೆ ಸಹಾಯಕರು/ಲೆಕ್ಕ ಸಹಾಯಕರು/ದ್ವಿತೀಯ ದರ್ಜೆ ಸಹಾಯಕರು ಹಾಗೂ ಕಂಪ್ಯೂಟರ್ ಆಪರೇಟರ್:–**

ಈ ಕೆಳಕಂಡ ಲಿಖಿತ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಮಾತ್ರ ನೇಮಕಾತಿ ಸಮಿತಿಯ ಮೂಲಕ ನೇಮಕಾತಿ.

1. **ಲಿಖಿತ ಪರೀಕ್ಷೆ:** ಎ) ಸಾಮಾನ್ಯ ಜ್ಞಾನ, ಸಾಮಾನ್ಯ ಆಂಗ್ಲ ಭಾಷೆ –150 ಅಂಕಗಳು
ಬಿ) ತಾರ್ಕಿಕ, ಸಂಖ್ಯಾ ಸಾಮರ್ಥ್ಯ ಮತ್ತು ಮಾನಸಿಕ ಸಾಮರ್ಥ್ಯ ಪರೀಕ್ಷೆ – 150 ಅಂಕಗಳು

**ಸೂಚನೆ:** ಪ್ರಶ್ನೆ ಪತ್ರಿಕೆಗಳಲ್ಲಿ ಉತ್ತರಿಸಲು ಕಷ್ಟವಾದ ಪ್ರಮಾಣದ ಮಟ್ಟವು ಬೇರೆ ಬೇರೆ ವೃಂದಗಳಿಗೆ ಬೇರೆ ಬೇರೆಯಾಗಿರಬಹುದು.

**ಶೀಘ್ರಲಿಪಿಗಾರರು:** ಪಿಯುಸಿ/12ನೇ ತರಗತಿ/ಕಮರ್ಷಿಯಲ್ ಪ್ರಾಕ್ಟೀಸ್‌ನಲ್ಲಿ ಡಿಪ್ಲೋಮೋ ಮತ್ತು ಕನ್ನಡದಲ್ಲಿ ಹಿರಿಯ ಶೀಘ್ರಲಿಪಿಯಲ್ಲಿ ಗಳಿಸಿದ ಅಂಕಗಳು ಮತ್ತು ನೇಮಕಾತಿ ಸಮಿತಿಯು ನಡೆಸುವ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ನೇಮಕಾತಿ ಮಾಡಲಾಗುವುದು.

**ಕಂಪ್ಯೂಟರ್ ಆಪರೇಟರ್ –ಹಾಗೂ– ಬೆರಳಚ್ಚುಗಾರರು:** ಪಿಯುಸಿ/12ನೇ ತರಗತಿ ಮತ್ತು ಕನ್ನಡದಲ್ಲಿ ಹಿರಿಯ ಬೆರಳಚ್ಚಿನಲ್ಲಿ ಗಳಿಸಿರುವ ಅಂಕಗಳು ಮತ್ತು ನೇಮಕಾತಿ ಸಮಿತಿಯು ನಡೆಸುವ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ನೇಮಕಾತಿ ಮಾಡಲಾಗುವುದು.

4. **ವಾಹನ ಚಾಲಕರು**: ನೇಮಕಾತಿ ಸಮಿತಿಯು ಸಹ–ಸದಸ್ಯರನ್ನಾಗಿ ನೇಮಕ ಮಾಡಿಕೊಂಡ ಪ್ರಾದೇಶಿಕ ಸಾರಿಗೆ ಅಧಿಕಾರಿ (ಆರ್.ಟಿ.ಓ) ಅವರಿಂದ ಚಾಲನಾ ಪರೀಕ್ಷೆ (ಚಾಲನಾ ಅಂಕಗಳು) ನಡೆಸುವ ಮೂಲಕ ಆಯ್ಕೆ.
5. **ದಲಾಯಿತ**: ಎಸ್.ಎಸ್.ಎಲ್.ಸಿ. ಯಲ್ಲಿ ಗಳಿಸಿರುವ ಅಂಕಗಳ ಆಧಾರದ ಮೇಲೆ ಅರ್ಹತೆಯನ್ನು ಪರಿಗಣಿಸಿ ನೇಮಕಾತಿ ಸಮಿತಿಯಿಂದ ಆಯ್ಕೆ ಮಾಡಲಾಗುವುದು.
6. **ವಯಸ್ಸು:** ಪಜಾ/ಪಪಂ– ಗರಿಷ್ಟ 35+5 = 40 ವರ್ಷ
ಹಿಂ.ವ(ಪ್ರವರ್ಗ–1) ಗರಿಷ್ಟ 35+5 = 40 ವರ್ಷ
ಇ.ಹಿಂ.ವ(ಪ್ರವರ್ಗ–2ಎ, 2ಬಿ, 3ಎ , 3ಬಿ) ಗರಿಷ್ಟ 35+3 = 38 ವರ್ಷ

**ನಿಗಮವು, ಅಧಿಸೂಚನೆ ಸಂಖ್ಯೆ:ಡಾ:ಬಿ.ಆರ್.ಅಂಅನಿ:ಸಿಬ್ಬಂದಿ:ವೃಮತ್ತುನೇ:**
**012:2013–14, ದಿನಾಂಕ:17.02.2014 ರ ಅನ್ವಯ ಅನುಮೋದಿಸಿದೆ.**

ಡಾ. ಆರ್.ರಾಜು
ವ್ಯವಸ್ಥಾಪಕ ನಿರ್ದೇಶಕರು
ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ಬೆಂಗಳೂರು.

## DR. B.R.AMBEDKAR DEVELOPMENT CORPORATION LIMITED, BANGALORE.

### NOTIFICATION

In exercise of the powers conferred under the Articles of Association of the Dr.B.R.AMBEDKAR DEVELOPMENT CORPORATION LIMITED (herein after called as Dr.BRADC) the Board of Directors of the said corporation with the approval of the Government of Karnataka makes the following regulation namely:

**RULES**

1. **Title and commencement**:- (1) These Rules may be called the Dr.BRADC (Cadre and Recruitment) Rules, 2013.
   (2) They shall come into force on the date of notification by the Board of Directors of the Corporation.
2. **Definitions**:- (1) In these Rules, unless the context otherwise requires:-
   a) "Appointing Authority" means the **Managing Director** of the Dr.BRADC.
   b) "Direct Recruitment" in relation to any category of service or post includes appointment otherwise than by promotion or deputation from any **state civil service or corporate or Body**:
   c) "Employee" means employee of the **Corporation** appointed in accordance with these regulations:
   d) "Board of Directors" means the Board of Directors of the **Corporation** formed as per Articles of Association of the Corporation.
   e) "Officer" means the Officer of the Corporation.
   f) "Backward Classes" means the persons belonging to the classes or categories so notified by the Government of Karnataka as Backward Classes.
   g) "Promotion" means the appointment from a lower post or grade of service to a higher post or grade of service in the **corporation**.
   h) "**Recruitment Committee**" means the Committee as prescribed in these Rules Authority appointed by the Board of Directors for the purpose of making direct recruitment.
   i) "Scheduled Castes" and "Scheduled Tribes" shall have reference to the Scheduled Castes and Scheduled Tribes in the Constitution (Scheduled Castes/Scheduled Tribes) Order 1950 made under Articles 341 and 342 of the Constitution of India:
   j) "Selection" means selection in accordance with the provisions of these Rules by the Recruitment Committee.
   k) "Corporation" means the Dr.BRADC., registered under the companies Act 1956.,

   (2) Words used but not defined in these Rules shall have the meaning assigned to them in the Companies Act, 1956 or as the case may be, in the rules made or deemed to have been made under the Karnataka State Civil Services Act, 1978 (Karnataka Act 14 of 1990).
3. **Application of other rules to the employees of the Dr.BRADC** :- The provisions of the other Rules as prescribed by the Government of Karnataka for Government Employees save as otherwise provided in these Rules, may be adopted as required with the approval of the Board for the Employees of Dr.BRADC.
4. **Category of posts, method of recruitment and minimum qualification**:- The establishment of the Dr.BRADC., shall consist of the category of posts, scale of pay, the method of recruitment and minimum qualification shall be as specified in scheduled I and II and VI.
5. **Employees of the Dr.BRADC., to pass certain Departmental Examinations**:-
   (1) The employee shall pass kannada language examination & certain other departmental examinations within the probationary period as provided under these Rules.
   (2) Employee shall be confirmed in the post held by him or shall earn an increment in the time scale of the pay only when he passes the departmental examinations.
   (3) For promotion to any higher post, candidate must have passed departmental examinations for such higher post, as provided under these rules.
6. **Authority to institute disciplinary proceedings and impose penalties and appeal provisions**:-

   The disciplinary proceedings against an employee of the Dr.B.R.Ambedkar Development Corporation Limited may be instituted by the Appointing Authority in accordance with the Karnataka Civil Services (Classification, Control and Appeal) Rules 1957. The Appointing Authority, the Disciplinary Authority to impose different type of penalties and Appellate Authority shall be as specified in Schedule – III, IV and V appended to these Rules.
7. **Retirement benefits**:- Employees of Corporation are eligible for the following benefits after retirement.
   a) Group gratuity
   b) Group Insurance
   c) Employees Provident Fund
   d) Earned Leave Encashment

   Notwithstanding anything contained in these regulations, an employee of the Dr. BRADCL shall not be eligible for pension.

**SCHEDULE - I**

**STATEMENT SHOWING THE CATEGORY OF POSTS, PAY SCALE & NUMBER OF POSTS**

**PUBLIC SECTOR UNDERTAKING : DR.B.R. AMBEDKAR DEVELOPMENT CORPORATION LTD.**

| Sl.No | Category of Posts | Pay Scale(Rs) | No of Posts | Remarks |
|---|---|---|---|---|
| 1 | Managing Director | | 1 | |
| 2 | General Manager | 40050-56550 | 4 | |
| 3 | Dy. General Manager | 36300-53850 | 4 | |
| 4 | Company secretary | 36300-53850 | 1 | |
| 5 | Executive Engineer | 36300-53850 | 1 | |
| 6 | Sr. Computer Programmer | 30400-51300 | 1 | |
| 7 | District Manager | 28100-50100 | 21 | |
| 8 | Assistant Executive Engineer | 28100-50100 | 1 | |
| 9 | Drilling Engineer | 24000-45300 | 1 | |
| 10 | Asst.District Manager(Recovery) - Grade "A" | 24000-45300 | 19 | |
| 11 | Assistant Engineer | 22800-43200 | 3 | |
| 12 | Taluk Development Officer - Grade "B" | 22800-43200 | 117 | |
| 13 | Internal Auditor | 21600-40050 | 1 | |
| 14 | Office Superintendent | 20000-36300 | 30 | |
| 15 | Accounts Assistants | 14550-26700 | 24 | |
| 16 | Stenographer | 14550-26700 | 3 | |
| 17 | First Division Assistant | 14550-26700 | 30 | |
| 18 | Second Division Assistant-Cum-Computer Operator | 11600-21000 | 49 | |
| 19 | Computer Operator-Cum-Typist | 11600-21000 | 16 | |
| 20 | Senior Driver | 14550-26700 | 5 | **Upgraded with approval of the Board** |
| 21 | Driver | 11600-21000 | 17 | |
| 22 | Dalayath | 9600-14550 | 32 | |
| | **Total** | | **381** | |

**SCHEDULE - II**

**STATEMENT EXPLAINING THE METHOD OF RECRUITMENT/PROMOTION/RE-DESIGNATION FOR THE POSTS AS PER STATEMENT-I**

**PUBLIC SECTOR UNDERTAKING : DR.B.R. AMBEDKAR DEVELOPMENT CORPORATION LTD.**

| Sl No | Category of Posts | Cadre strength | Pay scale revised | Method of recruitment | Eligbility | | |
|---|---|---|---|---|---|---|---|
| | | | | | For Direct Recruitment | For Promotion | |
| 1 | Managing Director | 1 | The scale attached to the deputationist | On deputation from IAS/IPS/IFS (Selction Grade) and KAS (Selction Grade) | - | - | |
| 2<br>2.1 | General Manager (P&A) | 1 | The scale applicable to KAS Sr. Scale (Rs.40050-56550) | By Promotion from cadre of Dy.General Manager or By Deputation from Govt. if there are no officers eligible for Promotion in the corporation | - | 1. Should have put in 5 years of service as DGM.<br>2. Should have Passed the Departmental exams Prescribed.<br>3. On seniority cum merit.<br>4. One year officiation period. | |
| 2.2 | General Manager (Devp) | 1 | The scale applicable to KAS Sr. Scale (Rs.40050-56550) | By Promotion from cadre of Dy.General Manager or By Deputation from Govt. if there are no officers eligible for Promotion in the corporation | - | 1. Should have put in 5 years of service as DGM.<br>2. Should have Passed the Departmental exams Prescribed.<br>3. On seniority cum merit.<br>4. One year officiation period. | |
| 2.3 | General Manager (I&T) | 1 | The scale applicable to KAS Sr. Scale (Rs.40050-56550) | By Promotion from cadre of Dy.General Manager or By Deputation from Govt. if there are no officers eligible for Promotion in the corporation | - | 1. Should have put in 5 years of service as DGM.<br>2. Should have Passed the Departmental exams Prescribed.<br>3. On seniority cum merit.<br>4. One year officiation period. | |
| 2.4 | General Manager (F) | 1 | (Rs.40050-56550) | By deputation from SAD/AG's office | - | - | |
| 3 | Dy. General Manager | 4 | (Rs.36300-53850) | By way of Promotion from the cadre of District Manager/Asst. General Manager. | - | 1. Should have put in 5 years of service as District Manager/Asst. Genl. Manager.<br>2. The Promotion should be on merit-cum seniority basis.<br>3. One year officiation period. | |

| Sl No | Category of Posts | Cadre strength | Pay scale revised | Method of recruitment | Eligbility | | |
|---|---|---|---|---|---|---|---|
| | | | | | For Direct Recruitment | For Promotion | |
| 4 | Company secretary | 1 | (Rs.36300-53850) | By Direct Recruitment | Associate Member of the ICSI (ACS) as prescribed under the provisions of Companies Act, 1956. 5 years experience preferred. Two years Probation period. | - | |
| 5 | Executive Engineer | 1 | (Rs.36300-53850) | By Deputation from PWD/Irrigation Dept. | - | - | |
| 6 | Sr. Computer Programmer | 1 | (Rs.30400-51300) | By deputation from any Govt. Agencies. | - | - | |
| 7 | District Manager/ Asst. General Manager | 21 | (Rs.28100-50100) | 50% Direct Recruitment. 50% Promotion. | Any graduate with MBA from a recognized University/Institutions. Should have a certificate course in MS office from a recongnised institution & Two years probation period. | For promotion should have put in 5 years of service as Asst. District Manager(Recovery) Should have passed Accounts Higher, General Law Part I & II, Community Development Part I & II. One year Officiation period. | |
| 8 | Asst. Executive Engineer | 1 | (Rs.28100-50100) | By Deputation from PWD/ Irrigation Dept. | - | - | |
| 9 | Drilling Engineer | 1 | (Rs.24000-45300) | By deputation from Dept. of Mines & Geology/ any Govt. Department/Govt. agencies | - | - | |
| 10 | Asst. District Manager (Recovery) Grade -A | 19 | (Rs.24000-45300) | 50% Direct Recruitment 50 % Promotion from Taluk Devp. Officer | Any graduate with MBA from recongnized | 5 Years experience as TDO. One year officiation period. Should have passed Accounts Higher, | The Board has approved in its 189th meeting to |

| Sl No | Category of Posts | Cadre strength | Pay scale revised | Method of recruitment | Eligbility | | |
|---|---|---|---|---|---|---|---|
| | | | | | For Direct Recruitment | For Promotion | |
| | | | | | University/ Institu tions. Should have a certificate course in MS office from a recongnised institution & 2 years work experience. Two years probation period. | General Law Part I & II, Community Development Part I & II. | redesignate the post of Recovry Officer as Asst. District Manager (Recovery) |
| 11 | Asst. Engineer | 3 | (Rs.22800-43200) | By Deputation from PWD/Irrigaion Department/any Govt. agencies | - | - | - |
| 12 | Taluk Devp. Officer-Grade "B" | 117 | (Rs.22800-43200) | 75% Direct Recruitment 25% promotion from the cadre of Office Superintendent. | Any graduate with MBA from recongnized University /Institutions. Should have a certificate course in MS office from a recognized institution. Two years probation period | 5 years experience as Office Supdt. Should have passed Accounts Higher, General Law Part I & II, Community Development Part I & II. One year officiation period | The TDO post is the only post at Taluk, he has to co-ordinate with the Taluk level Officers of the other departments in implementing the corporation programmes. He is also Member Secretary for the Beneficiary Selection Committee headed by MLA of the respective constituencies, where the members of the committee are all Taluk level officers. Therefore |

